# ಮಗುವಿನ ಕೂಗು

ಇದು ಯಾರದಿದು

ಇದು ದು

ಮುದ ಓದಲಿದು



ಪ್ರಕಾಶಕರು ಕೃಷ್ಣಾ ಕಂಪೆನಿ,
ಬೆಂಗಳೂರು ನಗರ.

# ಮಗುವಿನ ಕೂಗು

ಹ್ಲೈ ಯೆಂಬೋದೂ ಕುದುರೇ ಕಂಡು
ಕೂ ಯೆಂಬೋದೂ ಕುನ್ನಿಯ ಕಂಡು
ಮ್ಯಾ ವೆಂಬೋದೂ ಸೀಬಿಯ ಕಂಡು
ತ್ರಾ ಯೆಂಬೋದೂ ತಿಂಡೀ ಕಂಡು

ಪ ಯೆಂಬೋದೂ ಸಿಟ್ಟಿನ ಕೂಗು
ಊ ಯೆಂಬೋದೂ ಅಳು ಬಂದಾಗ
ಆ ಯೆಂಬೋದೂ ತಾಂಬೂಲಕ್ಕೆ
ಸಾ ಯೆಂಬೋದೂ ಸಂಗೀತಕ್ಕೆ

ಇವು ಕೇಳೆಲ್ಲವು
ಮಗುವಿನ
ಕೂಗು

# ನಾಯಿ

ಕಯ್‌, ಕುಯ್‌, ಗರ್‌, ಗುರ್‌.

|| ರ ಗ ಳ್‌. ಬೊ ಗ ಳ್‌ ||

ಕಯ್‌, ಕುಯ್‌, ಗರ್‌, ಗುರ್‌.

ಪೇಟೆ ಗೀಟೆ ಸುತ್ತುವೆ. ಗಲ್ಲಿ ಗಿಲ್ಲಿ. ನುಗ್ಗುವೆ
ಆಟ ಗೀಟ. ಮಾಡಿ ಸುತ್ತಿ. ಕಾಟ ಕೊಟ್ಟು. ಓಡುವೆ
ತೊಟ್ಟಿ ಗಿಟ್ಟಿಯುರುಡಿಸಿ. ಎಂಜಲೆಲ್ಲ. ಮೆಲ್ಲುವೆ
ಹೊಟ್ಟೆಗಿಲ್ಲ. ದಾಗ ನಾನು. ಮನೆಯ ನುಗ್ಗಿ. ನೋಡುವೆ
ಹುಂಜ ಹೆಂಟೆ. ಹಾರಿಸಿ. ಗೊಂದಲಿಕ್ಕಿ. ಕಾಡುವೆ
ಅಂಜುಬುರುಕ. ಡುರ್‌. ಮಿಯಾ. ಮೆಲ್ಲ ಅಟ್ಟಿಸಾಡುವೆ
ಕೈಯ್ಯ ರೊಟ್ಟಿ. ಕಂಡರೆ. ಒಯ್ಯನೆಯ್ದು. ನಿಲ್ಲುವೆ
ಮೈಯ್ಯಿ ಬಾಲ. ಮಾಡಿ ಸಾಡಿ. ಎಲ್ಲರನ್ನು. ಗೆಲ್ಲುವೆ
ಸುರುಳು ಕಿವಿಯು. ಜಾತಿನಾ. ಯುದೆನಿಸಿ ಕೊಂಡೆ. ಮೊದಲಿಗೆ
ಕೊರಳ ಪಟ್ಟಿ. ಬಂದ ಮೇಲೆ. ಕಿವಿಯು ಸೆಟ್ಟು ನಿಂತಿದೆ
ಚಿಕ್ಕ ಪುಟ್ಟ. ಮಕ್ಕಳ. ಒಕ್ಕಲಾಗಿ. ನಿಲ್ಲುವೆ
ನೆಕ್ಕಿ ಅವರ. ಕೈಯ್ಯಿ ಕೆನ್ನೆ. ಚೊಕ್ಕ ಬೆಳ್ಳಿಯಾಗುವೆ

ಕಯ್‌. ಕುಯ್‌. ಗರ್‌. ಗುರ್‌.

|| ರ ಗ ಳ್‌. ಬೊ ಗ ಳ್‌ . ||

# ಗಜ್ಜುಗದಾಟ

ಬೆಂಗಳೂರು ಬೆಂಗ್ಳೂರು ಬೆಂಗಳೂರು,
ಚಿಕ್ಕಪೇಟೆ ಒಂದು, ದೊಡ್ಡಪೇಟೆ ಎರಡು ;
ಬಳೆಪೇಟೆ ಮೂರು, ನಗರ್ತಪೇಟೆ ನಾಕು.

ಬಳೆಬಳೇಪೇಟೆ, ಅಲ್ಲಿ ಅರಳೆಪೇಟೆ,
ಚಿಕ್ಕಪೇಟೆಗಡ್ಡ,
ದೊಡ್ಡಪೇಟೆನೋಡು.

ಬಳೆಬಳೆಪೇಟೆ, ಬಾಳಜರಿಪೇಟ,
ಬಾಳಬರೋರ್ಕ್ಲುಟ; ಕುರ್ಚಿಮೇಜು ವಂದು,
ದೊಸೆಜೊತೆಎರಡು, ಕಾಫಿಪ್ಯಾಲಮೂರು,
ಕೈಗೆ ಕಾಗದ ನಾಕು, ಎಲೆಸುತ್ತು ಐದು,
ಲೆಖ್ಖದಪಟ್ಟಿ ಆರು, ದಖ್ಖಲಪಟ್ಟಿ ಏಳು.
ಬುದ್ಧಿಬಂತು,
ಕಷ್ಟಸಂತು.

ಬೆಂಗಳೂರು ಬೆಂಗ್ಳೂರು ಬೆಂಗಾಳೂರು,
ಅಜ್ಜಿಬಜ್ಜಿವಂದು, ವೀರಬಲ್ಲಎರಡು,
ಬೆಂಗಾಳ್ಳೂರು. ಕೆಂಪೇಗೌಡನಾಲ್ಕು,
ಕಿಲ್ಲೇದಾರಐದು, ಭಲ್ಲೆದಾರಆರು, ಆಲಿಹೈದ್ರಏಳು,
ಗೂಳಿಬಸವ,
ಗಾವೀಪೂರ.

ನಗರ್ತಪೇಟೆಗೆ ಹೊಗೋರ್ಬಾಳ.
ನಗನಾಣ್ಯ ನೋಡೋರ್ಬ್ಬಾಳ
ನಗುವಿನ ಕಟ್ಟೆಗೆ ಸಿಕ್ಕೋರ್ಬ್ಬಾಳ
ಹನ್ನೆರಡು ಹೊಡೀತು, ಚರಂಡಿಲಿ ಉಡ್ತುರ್
ಚಾವಡೀ ಕಂಡ್ತು,
ಲೇವಡಿಗಾಯ್ತು.

ರೊಕ್ಕಕಳಕೊಂಡ್ಯಾ, ದುಃಖಕೊಂಡುಕೊಂಡ್ಯ,
ಮಾನಕಳಕೊಂಡ್ಯ, ಏನಮಾಡ್ಲೆಂದ್ಯ
ಕಷ್ಟಸಂತು,
ಇಷ್ಟಸಂತು
ಬುದ್ಧಿಬಂತು.

# ಬುದ್ಧಿವಂತ

ಧನಿಧನಿ ಭೇದಿಸಿ ಪೇಳುವನವ್ವ
ಮಣಿಬಂದ
ಫಣಿಬಂದ
ಬಾಗಿಲಲೆಂಬ
ಹಣಕುತ ನಿಂತಿದ್ದು ಓಡು ಓಡೆನುವ
ಅಮ್ಮ
ಕೇಳಮ್ಮ
ಈ ಬೊಂಬೆಯು ಆಣೆಗು
ತಮ್ಮನು
ಎನಗಿಂತ ಬಲುಬುದ್ಧಿವಂತ
ಪ್ಯಾಲದಹಾಲೆಲ್ಲ ಚೆಲ್ಲಿದನವ್ವ
ಬಾಳ ಕೇಳೋ ಇದು ಸಾಗರವೆಂದ
ಪ್ಯಾಲವ ಕೌಚಿಟ್ಟು ಲಂಕೆಯಿದೆಂದ
ಬಾಳ
ಬಾರೋ
ಬಿಗಿ ನಡುವನು ಎಂದ
ನಾಳೆಯೆ
ತರುವೆನು
ಸೀತೆಯನೆಂದ
ಅಮ್ಮ
ಕೇಳಮ್ಮ
ತಮ್ಮನು ಎನಗಿಂತ
ಈ ಬೊಂಬೆಯು ಆಣೆಗು
ಬಲುಬುದ್ಧಿವಂತ

# ನಾಯಿ

ಕಯ್, ಕುಯ್, ಗರ್, ಗುರ್.

॥ ರ ಗ ಳ್. ಬೊ ಗ ಳ್ ॥

ಕಯ್, ಕುಯ್, ಗರ್, ಗುರ್.

ಪೇಟೆ ಗೀಟೆ ಸುತ್ತುವೆ. ಗಲ್ಲಿ ಗಿಲ್ಲಿ. ನುಗ್ಗುವೆ
ಆಟ ಗೀಟ. ಮಾಡಿ ಸುತ್ತಿ. ಕಾಟ ಕೊಟ್ಟು. ಓಡುವೆ
ತೊಟ್ಟಿ ಗಿಟ್ಟಿಯುರುಡಿಸಿ. ಎಂಜಲೆಲ್ಲ. ಮೆಲ್ಲುವೆ
ಹೊಟ್ಟೆಗಿಲ್ಲ. ದಾಗ ನಾನು. ಮನೆಯ ನುಗ್ಗಿ. ನೋಡುವೆ
ಹುಂಜ ಹೆಂಟೆ. ಹಾರಿಸಿ. ಗೊಂದಲಿಕ್ಕಿ. ಕಾಡುವೆ
ಅಂಜುಬುರುಕ. ಡುರ್. ಮಿಯಾ. ವೆಲ್ಲ ಅಟ್ಟಿಸಾಡುವೆ.
ಕೈಯ್ಯ ರೊಟ್ಟಿ. ಕಂಡರೆ. ಒಯ್ಯನೆಯ್ದಿ. ನಿಲ್ಲುವೆ
ಮೈಯ್ಯಿ ಬಾಲ. ಮಾಡಿ ಸಾಡಿ. ಎಲ್ಲರನ್ನು. ಗೆಲ್ಲುವೆ
ಸುರುಳು ಕಿವಿಯು. ಜಾತಿನಾ. ಯದೆನಿಸಿ ಕೊಂಡೆ. ಮೊದಲಿಗೆ
ಕೊರಳ ಪಟ್ಟಿ. ಬಂದ ಮೇಲೆ. ಕಿವಿಯು ನೆಟ್ಟು ನಿಂತಿದೆ
ಚಿಕ್ಕ ಪುಟ್ಟ. ಮಕ್ಕಳ. ಒಕ್ಕಲಾಗಿ. ನಿಲ್ಲುವೆ
ನೆಕ್ಕಿ ಅವರ. ಕೈಯ್ಯಿ ಕೆನ್ನೆ. ಚೊಕ್ಕ ಬೆಳ್ಳಿಯಾಗುವೆ

ಕಯ್. ಕುಯ್. ಗರ್. ಗುರ್.

॥ ರ ಗ ಳ್. ಬೊ ಗ ಳ್ .॥

# ಗಜ್ಜುಗದಾಟ

ಬೆಂಗಳೂರು ಬೆಂಗ್ಳೂರು ಬೆಂಗಳೂರು,
ಚಿಕ್ಕಪೇಟೆ ಒಂದು, ದೊಡ್ಡಪೇಟೆ ಎರಡು ;
ಬಳೆಪೇಟೆ ಮೂರು, ನಗರ್ತಪೇಟೆ ನಾಕು.

ಬಳೆಬಳೇಪೇಟೆ, ಅಲ್ಲೆ ಅರಳೆಪೇಟೆ,
ಚಿಕ್ಕಪೇಟೆಗಡ್ಡ,
ದೊಡ್ಡಪೇಟೆನೋಡು.

ಬಳೆಬಳೆಪೇಟೆ, ಬಾಳಜರಿಪೇಟ,
ಬಾಳಬರೋರ್ಕ್ಯಾಟ; ಕುರ್ಚಿಮೇಜು ವಂದು,
ದೊಸೆಜೊತೆಎರಡು, ಕಾಫಿಪ್ಯಾಲಮೂರು,
ಕೈಗೆ ಕಾಗದ ನಾಕು, ಎಲೆಸುತ್ತು ಐದು,
ಲೆಖ್ಖದಪಟ್ಟಿ ಆರು, ದಖ್ಖಲಪಟ್ಟಿ ಏಳು.
ಬುದ್ಧಿಬಂತು,
ಕಷ್ಟಸಂತು.

ಬೆಂಗಳೂರು ಬೆಂಗ್ಳೂರು ಬೆಂಗಾಳೂರು,
ಅಜ್ಜಿಬಜ್ಜಿವಂದು, ವೀರಬಲ್ಲಎರಡು,
ಬೆಂಗಾಳ್ಮೂರು, ಕೆಂಪೇಗೌಡನಾಲ್ಕು,
ಕಿಲ್ಲೇದಾರಐದು, ಭಲ್ಲೆದಾರಆರು, ಆಲಿಹೈದ್ರಏಳು,
ಗೂಳಿಬಸವ,
ಗಾವೀಪೂರ.

ನಗರ್ತಪೇಟೆಗೆ ಹೋಗೋರ್ಬಾಳ.
ನಗನಾಣ್ಯ ನೋಡೋರ್ಬ್ಯಾಳ
ನಗುವಿನ ಕಟ್ಟೆಗೆ ಸಿಕ್ಕೋರ್ಬ್ಯಾಳ
ಹನ್ನೆರಡು ಹೊಡೀತು, ಚರಂಡಿಲಿ ಉಡ್ತುರ್
ಚಾವಡೀ ಕಂಡ್ತು,
ಲೇವಡಿಗಾಯ್ತು.

ರೊಕ್ಕಕಳಕೊಂಡ್ಯಾ, ದುಃಖಕೊಂಡುಕೊಂಡ್ಯ,
ಮಾನಕಳಕೊಂಡ್ಯ, ಏನಮಾಡ್ಲೆಂದ್ಯ
ಕಷ್ಟಸಂತು,
ಇಷ್ಟಸಂತು
ಬುದ್ಧಿಬಂತು.

# ಬುದ್ಧಿವಂತ

ಧನಿಧನಿ ಭೇದಿಸಿ ಪೇಳುವನವ್ವ
ಮಣಿಬಂದ
ಫಣಿಬಂದ
ಬಾಗಿಲಲೆಂಬ
ಹಣಕುತ ನಿಂತಿದ್ದು ಓಡು ಓಡೆನುವ
ಅಮ್ಮ
ಕೇಳಮ್ಮ
ಈ ಬೊಂಬೆಯ ಆಣೆಗು
ತಮ್ಮನು
ಎನಗಿಂತ ಬಲುಬುದ್ಧಿವಂತ
ಪ್ಯಾಲದಹಾಲೆಲ್ಲ ಚೆಲ್ಲಿದನವ್ವ
ಬಾಳ ಕೇಳೋ ಇದು ಸಾಗರವೆಂದ
ಪ್ಯಾಲವ ಕಾಚಿಟ್ಟು ಲಂಕೆಯಿದೆಂದ
ಬಾಳ
ಬಾರೋ
ಬಿಗಿ ನಡುವನು ಎಂದ
ನಾಳೆಯೆ
ತರುವೆನು
ಸೀತೆಯನೆಂದ
ಅಮ್ಮ
ಕೇಳಮ್ಮ
ತಮ್ಮನು ಎನಗಿಂತ
ಈ ಬೊಂಬೆಯ ಆಣೆಗು
ಬಲುಬುದ್ಧಿವಂತ

# ಹುಡುಗರು

ಜಗುಲಿಯ ಕೆಳಗಡೆ ನಿಲ್ಲಲಿ ಬೇಡ
। ಮಗಮುಘವೆನುತಿದೆ ತುರುಬಿನ ಹೂವು ।
ತಡೆದು ಬಾರೋ ಗುಂಡೋಪಂತ
। ಕಡೆಗೆ ತಾರೊ ಗುಂಡು ಗೋಲಿ ।
ಕಡೆಮನೆಹುಡುಗನೆ ನಡೆಯೆಲೆ ಓಡೊ
। ಬಡಿಕೆಯ ತಂದಳು ಗೌರಿಯ ತಾಯಿ ।

ಧೀಂ ಧಾಂ ಧೀಂ ಧಾಂ ಧೀಂ

ಬೇಲಿಯ ಬುಡದಲಿ ಮುಳ್ಳಿದೆ ಭಾಳ
। ಕಾಲಿಡಲಾಚೆಗೆ ಕೆಸರಿದೆ ಕಾಳ ।
ಗೆದ್ದಲು ಹಿಡಿದಿದೆ ಯೀಕಡೆ ಬೊಂಬು
। ಬಿದ್ದಿಹ ಜಲ್ಲಿಯ ನೆಳೆಯಲೊ ಶಂಭು ।
ಕಂಡರೆ ಕಾಣದಹಾಗಿರಬೇಕು
। ತಿಂಡಿಯ ಒಡಲನು ತುಂಬಲು ಬೇಕು ।

ಧೀಂ ಧಾಂ ಧೀಂ ಧಾಂ ಧೀಂ

ಬಲುಬಲು ಹುಳ್ಳಗೆ ಬೇಲದ ಕಾಯಿ
। ಕೆಣಕಲು ಬ್ಯಾಡಿರಿ ಬಾಗಿಲ ನಾಯ ।
ಮೆಣಸಿನ ಪುಡಿಯನು ಅಸೆಯೊಳು ತುರುಕು
। ನಿಲುಕದು ನಮಗದು ಮಾವಿನ ಕಾಯಿ ।
ಮನೆಯವರೆಲ್ಲರು ಬರುವರು ಇನ್ನು
। ಹನುಮನ ಕಟ್ಟೆಗೆ ಹೊರಡಿರಿ ಮುನ್ನ ।

ಧೀಂ ಧಾಂ ಧೀಂ ಧಾಂ ಧೀಂ

ಗುಡಿಯೊಳು ಗಡಿಬಿಡಿ ಮೃಡನ ಪೂಜೆಮಾಡುವಾಗ

ಧೀಂ ಧಾಂ ಧೀಂ ಧಾಂ ಧೀಂ

# ಪ್ರತುಮೆ

ಸಕ್ಕರೆ ಖಜ್ಜುರ ದ್ರಾಕ್ಷಿ ಪುಟಾಣಿ
ಮಿಕ್ಕಹ ಸಿಹಿಸುಖದಿನಿಸೆಲ್ಲವೆಲ್ಲ
ಸೊಕ್ಕಿದ ಸಿಂಗಿಯ ಹಾಲೊಳುಕಲಸಿ
ಆಕ್ಕರ ಮಕ್ಕಳ ಮಿದ್ದು ಮಾಡುವರೈ

ಪ್ರತುಮಿಯ ಮಾಡುತ
ಮಧುಕರ ದಿನಿಸಲಿ
ಅತಿಶಯಮೂರ್ತಿಯ
ಮಗುವೆಂಬರೈಯ್ಯ

ಆನೆಯದಂತವು ಪಸಿಮೆಯಹೊನ್ನು
ಮಾಣಿಕ ಮುತ್ತು ವೈಢೂರ್ಯವು ನೀಲ
ಜಾಣರು ತೇದಿವ ತಿಂಗಳಬೆಳಕಲಿ
ಬಾನದ ಹತ್ತಿಯೊಳದ್ದಿ ತಿದ್ದುವರು

ಪ್ರತುಮೆಯ ಮಾಡುತ
ಮಧುತರ ದಿನಿಸಲಿ
ಅತಿಶಯಮೂರ್ತಿಯ
ಮಗುವೆಂಬರೈಯ್ಯ

# ಆಚಾರ್ರ ತಟ್ಟು

ಆಚಾರ್ತಟ್ಟು ಆಚಾರ್ತಟ್ಟು

ಹೈ ಹೈ ಹೈ ! ಹೀ ಹೀ ಹೀ !

ಆಚಾರ್ತಟ್ಟನು ಕಟ್ಟಲ್ಯಾತರಲ್ಲಿ ಆಚಾರ್ಜನಿವಾರ ಜನಿವಾರದಲ್ಲಿ
ಹೈ ಹೈ ಹೈ ! ಹೀ ಹೀ ಹೀ !
ಆಚಾರ್ತಟ್ಟಿಗೆ ಹೊಟ್ಟೆಗೇನು ಏನು ? ಆಚಾರ್ತಟ್ಟಿಗೆ ಕೊಡು ಕರಿತುಳಸಿ
ಹೈ ಹೈ ಹೈ ! ಹೀ ಹೀ ಹೀ !
ಆಚಾರ್ರ್ರೋಡಲು ನಡೆಯಿತು ಪೈಗು ಆಚಾರ್ನಿಂತರೆ ಕುಂತಿತು ಪೈಗು
ಹೈ ಹೈ ಹೈ ! ಹೀ ಹೀ ಹೀ !
ಅರಳಿಟ್ಟು ಅವಲಕ್ಕಿ ಕೊಬ್ಬರಿಬೆಲ್ಲ ಪರಿಪರಿ ತಿಂಡಿಯ ತುಂಬಿದರ್ಯೆಯ್ಯ
ಹೈ ಹೈ ಹೈ ! ಹೀ ಹೀ ಹೀ !
ನಡಿನಡಿ ಹಳ್ಳಿಗೆ ಪಡಿಗೆಯ ತರುವ ನಡಿನಡಿ ಕದರೇ ಸದರದ ಕುದುರೆ
ಹೈ ಹೈ ಹೈ ! ಹೀ ಹೀ ಹೀ !
ಅಚಾರ್ರೆಳೆಯಲು ತಿರುಗಿತು ಕದರು ಅಚಾರ್ರೋಡಿಸೆ ನಡೆಯಿತು ಕುದುರೆ
ಹೈ ಹೈ ಹೈ ! ಹೀ ಹೀ ಹೀ !
ಹಾದಿಯ ಉದ್ದಕು ! ಸೇದಿದರ್ಯೆಯ ! ಅಚಾರ್ಸೇದಲು ಐದಿತು ಕದರು
ಹೈ ಹೈ ಹೈ ! ಹೀ ಹೀ ಹೀ !
ಆಚಾರ್ನಿಂತರೆ ಕುಂತಿತು ಕುದುರೆ ಆಚಾರ್ರೇದಲು ಬೆವರಿತು ಕುದುರೆ
ಹೈ ಹೈ ಹೈ ! ಹೀ ಹೀ ಹೀ !
ಮನುಷನಂತೆ ಮನಸು ಮನದಂತೆ ಕುದುರೆ !

ಎನುತಾರ್ರಾಚಾರ್
ಭಪ್ಪರೆ ಪೈಗು ಹೈ ಹೈ ಹೈ ! ಹೀ ಹೀ ಹೀ !

ಅಚಾರ್ತಟ್ಟು ಆಚಾರ್ತಟ್ಟೊ
ಹೈ ಹೈ ಹೈ ! ಹೀ ಹೀ ಹೀ !

# ನಂ ಗೊತ್ತಿಲ್ಲ

ಮುಸಿಕುಡಿಕೆಯನೇ-ಉರುಟಿಟ್ಟು
ಹಸಿಕಾಗದದೋ-ಳೊತ್ತಿಟ್ಟು
ಹೊಸದೋತರದೋ-ಳ್ಳುಬ್ಚಿಟ್ಟ
ಹಸುಗೂಸಾರ್ರೈ-ಪೇಳುವೆಯಾ ?
ನಾಂ-ಗೋ-ತ್ತಿ-ಲ್ಲಾ-ಪ್ಪಾ

ಹಾರೊಡದಿಟ್ಟ್ರೋ-ಬಾಗಿಲನೆಲ್ಲ
ಊರಿನ ಎಳೆಗರು-ಗಳನೇ ಅಟ್ಟಿ
ಸೂರೇಗೊಂಡವ-ಱಾರು ಮುಚ್ಚ್ರೋರೆ ?
ನಾಂ-ಗೋ-ತ್ತೀ-ಲ್ಲಾ-ಪ್ಪಾ

ಬಗ್ಗದ ಕಿವಿಯಾ-ಕುನ್ನಿಯ ಮರಿಯಾ
ಹಿಗ್ಗೀ ತಂದಿಟ್ಟು-ಹಾಸಿಗೆಯೊಳಗೇ
ಮಗ್ಗುಲಲಿದ್ದು-ಹಾಲನೆ ಹಾಕೀ
ಹಿಗ್ಗಿದರಾರ್ರೈ-ಪೇಳುವೆಯಾ ?
ನಾಂ-ಗೋ-ತ್ತೀ-ಲ್ಲಾ-ಪ್ಪಾ

ಯಾಕೆಲ್ಲ ನಗುತ್ತಿದ್ದು ಕಾಡಿ ಕಿಚ್ಚಾಡಿ
ಬೇಕಾಗಿ ಬೇಡಾಗಿ-ಕಣುಮುತ್ತನೊತ್ತಿ
ಸಾಕೆಂದು ನೂಕಲು-ನುಗ್ಗಿ ಮುತ್ತಿಟ್ಟ
ಚೀಕ್ಕವನಾರ್ರೈ-ಪೇಳುವೆಯಾ ?
ನಾಂ-ಗೋ-ತ್ತೀ-ಲ್ಲಾ-ಪ್ಪಾ

# ಬೀಸಣಿಗೆ

ಬೀಸಣಿಗೇ
ಕೊಳ್ಳೀ
ಬೀಸಣಿಗೇ

ಚಳಿಚಳಿಯಾದರೆ ಬೀಸಣಿಗೆ
ಬಲುಧಗೆಯಾದರೆ ಬೀಸಣಿಗೆ
ಹಲವರುಸೇರಲು ಬೀಸಣಿಗೆ
ಬಲುಜನಕಾದುದು ಬೇಸಣಿಗೆ ॥ ೧ ॥

ಆಸೆಯು ಸುಡುತಿದೆ ಕಾಯುತಿದೆ
ದೋಷದ್ರುಕ್ಕೆಂಬಿವು ಬೇಯುತಿವೆ
ಮೋಸ ಕಿಚ್ಚೆಂಬಿವು ಹಾರುತಿವೆ
ದೇಶದೊಳಂತರ ದೇಶದೊಳು ॥ ೨ ॥

ಅಳಿದಿಹ ಭಾವನೆ ಅಲ್ಲಿಹುದು
ಕೊಳೆಯುವ ಕಲ್ಪನೆ ಇಲ್ಲಿಹುದು
ಹಳೆಯದು ದ್ವೇಷವು ಸಲ್ಲದಿದು
ತಿಳಿದರು ಕೂಡಿಸಿ ಕಿಚ್ಚಿಡಿರಿ ॥ ೩ ॥

ಕೊಳ್ಳಿ ಬೀಸಣಿಗೆ
ಬೇಕೆ ಬೀಸಣಿಗೆ
ಒಳ್ಳೆ ಬೀಸಣಿಗೆ

ಬೀಸಣಿಗೆ
ಕೊಳ್ಳಿ
ಬೀಸಣಿಗೆ

# ಜಾಂಬುವಂತ

೧

ಜೂಲು ಮುಯ್ಯಿ ಜೂಲು
ಕಾಲು ಹ್ಯಾಟ ಗಾಲು
ಬಾಲ ಮೋಟ ಬಾಲ
ಬೆರಳೆಲ್ಲ ಕಂಚಿನ ಕೂರುಗುರು
|| ಬಲು ಕೂರುಗುರು ||

೨

ಬಂದ ಜಾಂಬುವಂತ
ಬಂದ ಕುಣಿದು ನಿಂತ
ಬಂದ ದಣಿದು ನಿಂತ
ಮುಸುಮುಸು ಕುಯಿಕುಯಿಗುಟ್ಟುತಲಿ
|| ಗುರುಗುಟ್ಟುತಲಿ ||

೩

ಮಿಗಿಲೆಲ್ಲ ನೀಟುಗಾರ
ಬಗಲಲ್ಲಿ ಮೋಟುಗೋಲು
ಚಿಗಿಯುತ್ತ ಬಂದ ನೋಡು
ಮಾವನ ಮನೆಗೆಂದು ಅಳಿಯಮಯ್ಯ
|| ತಾನಳಿಯಮಯ್ಯ ||

೪

ಸುಗಿದೆದ್ದು ಸುತ್ತಿಸುಳಿದ
ಮೊಗದಲ್ಲಿ ವಾಟೆ ಕೊಳಲು
ಹೆಗಲಲ್ಲಿ ತಾಟಗೋಲು
ಗೋಹಿಂಡ ಕಾಯ್ವ ಗೋವಿಂದ
|| ಸಿರಿ ಗೋವಿಂದ ||

೫

ಕೊರಳಿಗೊಂದು ಝುಣಕಾರ
ಕಾಲಿಗೊಂದು ಗಗ್ಗರ
ಮೂಗಿಗೊಂದು ಉಂಗುರ
ಆದು ಇದಕೊಂದ ಮಿಣಿಮಿಣಿಯು
|| ಹುರಿ ಮಿಣಿಮಿಣಿಯು ||

೬

ಮೂಗುದಾರ ತುಯ್ದರೆ
ಜಾಗಾಕಿ ಕುಣಿವೆ
ಬಾಗುತ್ತ ಮಣಿವೆ
ಯಾರಿಗಾಗಿ ಧಣಿಯುವಿ ಜಾಂಬುವಂತ
|| ಓ ಜಾಂಬುವಂತ ||

೭

ಏನು ತಿಂಡಿ ಬೇಕೋ
ಜೇನು ತಿಂದ ಜಾಂಬು
ಏನು ತಿಂಬೆ ನೀನು
ಮಾನ ಹೋದ ಮೇಲಿನ್ನು ಒಡಲಿಲ್ಲ
|| ತಿಂಬ ಒಡಲಿಲ್ಲ ||

೮

ತಿರಕಪ್ಪ ಹಿಡಿದ
ಹೊರಜಿಯ ಬಿಗಿದ
ಕರಡಪ್ಪ ದುಡಿದ
ಮುರುಡಪ್ಪ ನಲಿದ
ತಿರಿದನು ಹಿಟ್ಟು ರೊಟ್ಟಿ—ಮಡಿಲಲ್ಲಿ
|| ಮೊರಮೊರದಲ್ಲಿ ||

# ಲಚ್ಚೆಯ ಹೈದ

ಬತ್ತಾಸ ಬುಟ್ಟಿಗೆ ಹಾರಿದ ಹೈದ
ಮತ್ತಾ ಬುಟ್ಟಿಯು ಬಲು ತುಂಬಿತ್ತು

ಗುಟುರುವ ಗೂಳಿಯಬಾಯಿಗೆ ಬಿದ್ದ
ಬಟವಾಗೂಳಿಯು ಬಲು ಮಲೆತಿತ್ತು

ಮುಂಡಾಸೊಳಗಡೆ ಹಾರಿದ ಹೈದ
ಮುಂಡಾಸದು ಬಲು ಮಣಕಾಗಿತ್ತು

ಮಣಕಿನಮುಂಡಾಸಿಂದಲೆ ಹೈದ
ಹೆಣಕಿದ ಜೇನಿನ ಗೂಡಿಗೆ ಹಾರಿ

ಗೂಡಿನ ಜೇನವು ಕಾಡಲು ಬಾಳ
ಗಾಡಿಯ ಒಳಗಡೆ ಧುಮುಕಿದ ಹೈದ

ಹೊಯ್ದರು ಅಲ್ಲಿಯ ಜನಗಳು ಅವನ
ಹೈಯ್ದನು ಬೋನಿನವಳಗಡೆ ಹೊಕ್ಕ

ಬೋನಿನವಳಗಡೆ ಪರಚಿತು ಕೋತಿ
ಬಾನಕೆ ನೆಗೆದನು ಬಚ್ಚೆಯ ಹೈದ

ಬಣವೆಯ ಮೇಲಕ್ಕೆ ಬಿದ್ದನು ಹೈದ
ಬಣವೆಯು ಹೊಗೆಯಿತು ಭುಗಭುಗಯೆಂದು

ಒಣಕಲು ಕೆಮ್ಮಲು ಕೆಮ್ಮಿದ ಹೈದ
ಕಣದೊಳಗೆಲ್ಲಾ ಹೊರಳಿದ ಹೈದ

# ನಾವೆಲ್ಲರು ಒಂದೆ

ಮರದಡಿ ಕೊಳದಡಿ ನೆರಳಲಿ ಬಿಸಿಲಲಿ
ಹರಿದಾಡಿ ಹಾರಾಡಿ ಹರಿಸದಿ ಬೆರೆತೆವು

ಎಲೆಗಳು ಪಿಸಪಿಸ ಸುಳಿಗಾಳಿ ಸುಯಿಸುಯಿ
ಎಳೆಬಿಸಿಲ ಕಾದೆವು ಕೊಳಲೂದಿ ಮರೆತೆವು

ಅರ್ಥವಿಲ್ಲದೆ ಆಡಿ ವ್ಯರ್ಥಕಾಲವ ಕಳೆದ
ಅರ್ಥವನರಿಯದ ಬಾಂಧವ್ಯವೆಮ್ಮದು

ಹೆಜ್ಜೆಯ ಜಾಡೊಳು ಹೆಜ್ಜೆಯನಿಕ್ಕುವ
ಗೆಜ್ಜೆಯ ಕಾಲಿನ ಅಜ್ಜರು ನಾವೆಲ್ಲ

ಎಳೆನಗು ಕಿಲಕಿಲ ಬಳಬಳ ಕಣ್ಣೀರು
ಕಲಕಲ ಮಾತಿನ್ನು ಗೆಲವು ಸೋಲಲ್ಲಿ

ಎಲ್ಲೆಲ್ಲಿ ಬಾಲರು ಇಲ್ಲೆಲ್ಲ ಕೂಡುತ
ಎಲ್ಲರೊಂದಾದೆವು ಎಲ್ಲ ಸೋದರರು

ಎಲ್ಲಿದ್ದರೂ ನಮ್ಮ ಸೊಲ್ಲೆಲ್ಲ ಒಂದೇ
ಅಂದದಾನಂದದ ಚಂದುಳ್ಳ ಬಾಲರ

ಪಲ್ಲವಿ

ಎಲ್ಲರು ಒಂದೆ ನಾವೆಲ್ಲದು ಒಂದೆ
ಎಲ್ಲರು ಒಂದೆಂದು ಎಂದೆಂದು ಹೇಳುವ
ಎಲ್ಲರು ಒಂದೇ
ನಾವೆಲ್ಲರು ಒಂದೇ

# ಮುತ್ತಿನ ಶೆಟ್ಟಿ

ಕುಟ್ಟಿ ಕೊಕ್ಕ ಮುರಿಮುರಿ ದಿಟ್ಟುಬಂದೆ ಗೂಡಗೀಡ
ಕಷ್ಟಪಟ್ಟೆ ಬಲುಬಲು
ಇಷ್ಟದಣ್ಣ ನೆಲ್ಲಿ ಎಲ್ಲಿ
ಮುತ್ತಿನ್ಶೆಟ್ಟೀ ತೋರ್ರೆ ತೋರ್ರೆ ತೋರ್ರೆ

ನುಗ್ಗಿದೂರ ಹಾಳುಮಾಡಿ ನುಗ್ಗಿಬಂತು ಹುಚ್ಚುಹೊಳೆಯು
ಸುಗ್ಗಿಸುಗ್ಗಿ ಯಮುನಮನೆಗೆ
ಬಗ್ಗಿನೋಡು ಅಣ್ಣನವನೆ
ಮುತ್ತಿನ್ಶೆಟ್ಟೀ ತೋರ್ರೆ ತೋರ್ರೆ ತೋರ್ರೆ

ಮಾಟಗಾರ್ತಿ ಕೆಡಹಿ ಕುಡಿಸಿ ನೋಟಬದುಲ ಮಾಡಿಯಿಹಳು
ಮಾಟವಿದನು ದೂರಬಲ್ಲ
ಸೂಟಿಯಿಂದ ಕೂಗಲಣ್ಣ
ಮುತ್ತಿನ್ಶೆಟ್ಟೀ ತೋರ್ರೆ ತೋರ್ರೆ ತೋರ್ರೆ

ಅಣ್ಣ ಅಣ್ಣ ಕೇಳು ಕೇಳು ಸಣ್ಣಹಳ್ಳ ಹುಚ್ಚುಹಿಡಿದು
ನಿನ್ನಊರ ನುಗ್ಗುತಿಹುದು
ಸಣ್ಣ ತೊರೆಯಿದೇರುತಿಹುದು
ಮುತ್ತಿನ್ಶೆಟ್ಟೀ ತೋರ್ರೆ ತೋರ್ರೆ

ಅರಸಗಿತ್ತು ಮುತ್ತು ರತುನ ಪುರದ ಶೆಟ್ಟಿ ಕರೆಯಕಳಿಸೆ
ಮರೆದು ನಿಂದ ಎನ್ನಅಣ್ಣ
ಕರೆದುಕೂಗು ಕಣಿವೆಯಲ್ಲಿ
ಮುತ್ತಿನ್ಶೆಟ್ಟೀ ತೋರ್ರೆ ತೋರ್ರೆ ತೋರ್ರೆ

ಸತ್ತೆನೆನುತ ಮಾಟಗಾರ್ತಿ ಮತ್ತೆಮತ್ತೆ ಮುಳುಗುತಿಹಳು
ಹತ್ತಿ ಬಂದ ನೀರು ಅವಳ
ಸುತ್ತಿ ಸುಳಿಯೊಳಿಟ್ಟಿತು
ಮುತ್ತಿನೈಟ್ಟೇ ತೊರ್ರೆ ತೊರ್ರೆ ತೊರ್ರೆ

ತಿರುಗಿ ಬರುತಲಣ್ಣ ಹೆಣ್ಣ ತರುವನೇನೊ ತನಗೆ ಎನಗೆ
ಹರಿಗೋಲವನು ತೊರೆಯೆ ಹರಿಸೆ
ಅರಿವನೆಂತು ಎನ್ನ ಅಣ್ಣ
ಮುತ್ತಿನೈಟ್ಟೇ ತೊರ್ರೆ ತೊರ್ರೆ ತೊರ್ರೆ

ಗುಡಿಯ ಗಂಟೆಯಲುಗ ಗಣಿಕೆ ಗಿಡದ ಬುಡದಿ ಹೂತಳಾಕೆ
ನುಡಿಯೆ ಗಂಟೆ ನುಡಿವೆ ನಾನು
ತಡೆಯುನೆಂತು ತಿಳಿವನಣ್ಣ
ಮುತ್ತಿನೈಟ್ಟೇ ತೊರ್ರೆ ತೊರ್ರೆ ತೊರ್ರೆ

ಧನಿಯಕೇಳಿ ಬಂದು ನಿಂದು ಮನವ ತೆರೆದು ನೋಡಿ ಮೂಡಿ
ಅನುಜನೆಂಬ ಭಾವಗೀವ
ವೆನಗೆ ಶೆರೆಯ ಬಿಡಿಸಬಲ್ಲ
ಮು ತ್ತಿ ನೈ ಟ್ಟೇ ತೊರ್ರೆ ತೊರ್ರೆ ತೊರ್ರೇ

ಎಲ್ಲಿ ಎಂದು ತಿರುಗಿ ಬಂದು ಎಲ್ಲರನ್ನು ಕಾಣದಣ್ಣ
ಚಲ್ಲಿ ಮುತ್ತು ರತ್ನವೆಲ್ಲ
ಎಲ್ಲಿ ಅಸುವ ನೀಗುತಿಹನೊ
ಮು ತ್ತಿ ನೈ ಟ್ಟೇ ತೊರ್ರೆ ತೊರ್ರೆ ತೊರ್ರೇ

# ಶ ಕು ನ

ಸೊರಗುಟ್ಟ ಪಾಯಸ ಸುರಿಯಲಿಬೇಡ
ಥರಥರ ವಗರಿನ ನುಡಿಯಿಡಬೇಡ
। ತಿರುಗುವರಿಲ್ಲಿಲ್ಲೆ ಗುಡಿ ಶಕುನಕ್ಕೆ ।

ಗೌಳಿಯು ಲೊಚ ಲೊಚ ಗುಟ್ಟಿತು ಒಳಗೆ
ಫೌಳಿಯ ಮೇಲಿಡು ದೊಂದಿಯ ಹಚ್ಚಿ
। ಜೌಳಿಯ ತರುವರು ಬೀಗರು ಮನೆಗೆ ।

ಜಂಬ ಜಾವಕ್ಕಿಯು ಸಿಕ್ಕಿದರೆನುತ
ಅಂಬರದಿಂದಲೆ ದೂತರ ಕರೆಯೆ
। ಬೆಂಬೂದಿಯಲ್ಲಿಡು ಸೌಟಿನ ಕಾವ ।

ಅಟ್ಟೊಲೆ ಕರೆಯಿತು ನೆಂಟರನಿಂದು
ಕೊಟ್ಟಿಗೆ ಹಾರಲಿ ಕರೆಯಿತು ಹಾಗೆ
। ಬಿಟ್ಟಿಯ ಕೂಳಿಗೆ ಬರುವರನೆಲ್ಲ ।

ತೊಟ್ಟಿಲಲುತ್ಸವ ಮೂರುತಿ ನಗಲು
ಪುಟ್ಟ ಕೈಜಾಗಟೆ ಕಿಟ್ಟ ಬಾರಿಸಲು
। ನೆಟ್ಟನೆ ದೇವರು ಬಂದರು ಮನೆಗೆ ।

# ಕತ್ತೆ

೧

ಚಳಿಯುಲಿಹೆನು ಕತ್ತೆಯು
ಬಳಿಯಲಿಹರು ಮೂಟೆಯ
ಗೆಳೆಯರಿವರು ನಿದ್ರೆಯ
ಸೆಳವಲಿಹರು ಮುಗ್ಧರು

೨

ಬಿಗಿದು ಗೋರಸ ಹಿಂಗಡೆ
ಅಗಸ ಹುರಿಯ ಕಟ್ಟಿಹ
ಅಗಸ ಬಿಗಿದ ಕಾಲ್ಗಳ
ಬಿಗಿದ ಸೆಳೆದು ಬಾಲದಿಂ

೩

ಬಹಳ ಮುದದ ಬಂಧನ
ವಿಹುದು ಎಮಗೆ ಹಿಂಗಡೆ
ಅಹಹ ಉಳಿದ ಹೈನಿಗೆ
ಮಹತು ದುಗುಡ ಮುಂಗಡೆ

೪

ಜಗದ ಸಕಲ ಸೃಷ್ಟಿಯು
ಬಗೆದು ನೆನೆವೆ ನೀಗಲೆ
ಸೊಗಸು ತಿನಿಸ ನೆಲ್ಲವ
ಬಗೆದು ನೆನೆವೆ ಮುನ್ನಮೆ

೫

ವಸಡ ಬಲದಿ ಕಿತ್ತರೆ
ಮುಸುಮುಸೆನುವ ಹುಲ್ಲದು
ಹಸನು ತಿನಲು ಕತ್ತೆಗೆ
ಹಸನು ಗರುಕೆ ಚೌಳಲಿ

೬

ಸರಸಕೆನುತ ಜೋಳದ
ದರಗುಮುರಮುರೆಂಬುದು
ಸರಿದು ನೆಗೆವ ಕಾಂಡವು
ಮುರಿದು ಮೆಲಲು ಚಂದವು

೭

ನೆನೆದ ಹುರುಳಿ ತೌಡಿರೆ
ಘನದ ಮುದದ ಪಾರಣೆ
ತಿನೆ ಕರಕರ ಖಾರವು
ದಿನಸ ನಡುವೆ ನೀರುಳಿ

೮

ಹಲಸು ಕಚಕಚೆಂಬುದು
ವಲಿದು ನಿಲುತ ಹಲ್ಲಲಿ
ಬಲಿತ ಕದಳಿ ಎಂಥುದೊ
ನಿಲುಕ ದಿಹುದು ಕತ್ತೆಗೆ

೯

ಕೆಸುವು ಕೆಸರ ಲಿರ್ಪುದು
ಕಸರಿ ಸೆಳೆಯೆ ಬರ್ಪುದು
ಹಸುರು ಗಿಸುರು ಇಲ್ಲದ
ಅಸಮ ಸಮಯ ಕೊಳ್ಳಿತು

೧೦

ಸಿಹಿಸಿಹಿ ಬಲು ಬೆಲ್ಲವು
ಅಹ ರಸಗಸ ವೆಂಬುದು
ಬಹು ಬಲಕರ ಕತ್ತೆಗೆ
ಬಹಳ ಬೆರೆಯೆ ನೀರುಳಿ

೧೧

ಕನಸಲೆಂದು ಕಾಣದ ತಿನಸು ಸೊಗಸು ನೆಕ್ಕಲು
ಕಣಕಣೆನುತ ಲಾಡುವ ಧಣಿಯ ಮಗಳ ಕೈಗಳು

ಕತ್ತೆ ಹೀಗೆಂದಿತು.

# ಡಾ ಢಿಮೀ ಡಾಮ ಢಂ ಡಂ

ವ ಬಯಸಿ ಗುಡವ ಬೇವ .... ತಿಂದು ಕೋಸುಂಬರೀಯಂ
ಸ ಹುಯಿಸಿ ಕುಡಿಯೊ ಪಾನ್ಕ .... ಈಗಲೇ ಬಂತು ಚೈತ್ರಂ
ಂ ಬೆಯಿಸಿ ತಿನುವ ಜೋಳ .... ಕೇಳು ವೈಶಾಖ ಬಂತೋ
ತ ಹೊಯಿಸು ಗಜುಗ ಗೋಲಿ .... ಡಾ ಡಿಮೀ ಢಾಮ ಢಂ ಡಂ

ಜನುಮ ದಿನವು ಬಂತು .... ಕೃಷ್ಣರಾಜಾಧಿ ರಾಜಂ
ಗ್ರೀ ಮನುಜ ಹರಿಗಳಿಲ್ಲ .... ಪುಟ್ಟುವೀ ಕಾಲ ಜೇಷ್ಠ್ಯಂ
ಷ್ಮ ದಿನದ ಬಿಸಿಲ ಬೇಗೆ .... ಕೇಳು ಆಷಾಡ ಕಿಂದೂ
ಜನಕೆ ಪಠದ ಹಬ್ಬ .... ಡಾ ಢಿಮೀ ಡಾಮ ಡಂ ಢಂ

ಗರುಡ ಕಡುಬು ಬೆಂದು .... ಗೋಪಿ ಶುಂಠೀಯು ಸಂತು
ವ ಟುರುಪು ಟುಪುರು ಸೂರು .... ಶ್ರಾವಣೀ ದಾರ ಸಂತು
ರ್ಷ ಉರುಟು ಕಡುಬ ತಂದ .... ಶ್ರೀಗಣಾಧೀಶ ಬಂದ
ಬರೆದೆ ಇರದು ಭಾಧ್ರ .... ಕುಟ್ಟು ನೀ ಪೆಟ್ಲ ಡಂ ಢಂ

ಶ ವಿಜಯ ದಶಮಿ ಯಿಂದು .... ನಾಳೆ ಶ್ರೀದೇವಿ ಕೂಟ
ರ ಗಜಬಜಿ ಮಹಿಷೂರು .... ನೋಡು ಆಶ್ವೀಜ ಕಿಂತು
ದ ಭಜಿಸಿ ಬಲಿಯ ನಿಂದು .... ದೀಪದಾಢಾಕಿ ಹಚ್ಚು
ವಿಜಯಿ ಶರದ ಬಂದ .... ಢಾರುಣೀಯೋಪ ಡಂ ಢಂ

ಹೇ ಕರೆಯೆ, ತಿರುಗು, ಜಾತ್ರೆ .... ರಾಮ ರಂಗಾದಿ ದೇವ
ಮ ತರಣಿ ರಥವ ನೇರೆ .... ಬೆಲ್ಲದೆಳ್ಳೊಯ್ಯು ಬೀರು
ಂ ಹರಹಿ ಬರಗ ಹಾರಿ .... ಬಂತು ಬೆಳ್ಳಕ್ಕಿ ಯಿಂದು
ತ ಹೊರಳಿ ಹರಿಯೆ ಪುಷ್ಯ .... ಗಾಳಿ ಚಂಡಾಡು ಡಂ ಢಂ

ಶಿ ಭುವನ ನಡುಗಿದಂದು .... ಚಿಳ್ಳಿ ಕೋಲಾಡು ನೀನು
ಶಿ ದವನ ವೆಸೆದ ರೆಲ್ಲ .... ಸೀಬಿನ್ಯಾಂಸಿಹೃಗೆಂದು
ರ ಶಿವನ ಕೆಣಕಿ ಕಾಮು .... ಗೊಳ್ಳೈ ಶಿಕ್ಷೆಯೊಯ್ತು
ಅವನ ದಿವಸ ವಿಂದು .... ಡಾ ಡಿಮೀ ಢಾಮ ಡಂ ಢಂ

# ಆದಿತ್ಯವಾರ

ಮಿಣುಕು ಬತ್ತಿಯ ಬೆಳಕಲರಗಣ್ಣು ನೋಡಿದ
ಒಣಕು ಪಾಠದ ನೆನಹು ದಿನದೊಳಗಿಲ್ಲ
ಒಣಗಿದೆ ನಾಲಿಗೆ ಒದರುತ ಪಾಠವ
ಉಣಲಿನ್ನು ತಿನಲಿನ್ನು ಸಮಯವೆಲ್ಲಿ

ಬರಬೇಕು ಬರೆಯಬೇಕು
ಇರಬೇಕು ಕಲಿಯಬೇಕು
ತರತರ ಕೆಲಸವ ಹೊರುತಲಿ ತಲೆಯಲಿ
ಬರುವರು ಸೋಮ್ಮಂಗಳ್ಬುಧರೆಲ್ಲ

ಲೆಕ್ಕವ ಗುಣಿಸಿದೆ ನೆತ್ತಿನೋವು
ಅಕ್ಕ ಕೇಳಂಕಿಗಳ್ಕುಣಿಯುತಿವೆ
ಲೆಕ್ಕ ಕಾಪಿಯು ಸಾಕು ಚಿಕ್ಕಜ್ಜಿ ನೀ ಪೇಳೆ
ಅಕ್ಕರೆಯಾದಿತ್ಯನೆಲ್ಲಿಹನು

ಕಂಡರೆ ಬರಹೇಳು ಕಥೆಯೊಳಗೆ
ಉಂಡಾಡಿಯಾತನ ಚಿಕ್ಕಜ್ಜಿ
ಕಂಡರೆ ತರಹೇಳು ಹಾಸ್ಯ ಕುಚೋದ್ಯವ
ಭಂಡಾಟಗಳನೆಲ್ಲ ಮರೆಯದಲೆ

ಪಲ್ಲವಿ

ನೋಮಂಗಳ್ಬುಧರು ದೌಡಿಟ್ಟು ಬಂದರು
ಸೋಮಾರಿಯಾದಿತ್ಯ ಬರಲಿಲ್ಲವೇ

# ಜನುಮ ದಿನ

ಹಾದಿಯಲಿ ಜನಗಳೋಡಾಟವೇಕಮ್ಮ
ಸುಮ್ಮನೆ ಜನವೆಲ್ಲ ನಲಿವರೇಕಮ್ಮ?

ಈ ದಿವಸ ಹಬ್ಬವೈ ಜನಕೆಲ್ಲ ಕಂದ
ಇಂದೆಲ್ಲ ನಲಿದಾಡಿ ಪಾಡುವರು ಕಂದ

ಮಲ್ಲೆಮಲ್ಲಿಗೆಯಿಂದು ತುಟ್ಟಿಯೇಕಮ್ಮ
ಸುಮ್ಮನೇ ಹಾರಾಡಿಕೊಂಬರೇಕಮ್ಮ?

ಚಲ್ವಪೂಗಳಿಗಿಂದು ಕಂಪು ಬಹು ಚಂದ
ಇಂದೆಲ್ಲ ಪೂಗಳಿಗೆ ಕಂಪು ಬಲು ಕಂದ

ಬಂದಬಂದವರೆಲ್ಲ ಮುತ್ತಿಡುತಲಮ್ಮ
ಕಂದ ಹಿಡಿ ತಿಂಡಿಯನು ಎಂಬರೇಕಮ್ಮ?

ಅಂದದಾ ಮಧುಮಗನೆ ಇಂದೆಲ್ಲ ನೀವು
ಚಂದುಳ್ಳ ಪದುಮಗಳ ಕಾಂತಿಯೊಂದಿಹಿರಿ

ಏಕಮ್ಮ ಮನವುಬ್ಬಿ ಮೈಯ್ಯುಬ್ಬುತಿಹುದು
ಸಾಕಮ್ಮ ಬಿಡು ಇನ್ನು ನಾನಾಡಿ ಬರುವೆ

ನೀ ಕೇಳು ಕಂದಯ್ಯ ಇಂದಿನೀ ದಿವಸ
ಸಾಕುವನು ನಿಮ್ಮನ್ನು ಪುಟ್ಟಿಹನು ಕಂದ

ಜಯಚಾಮರಾಜೇಂದ್ರನೆಂತೆಂದು ಮೆರೆವ
ನಯನೀತಿಕೌಶಲಕೆ ಮೆರುಗಿಡುವನವನು
ಜಯವಿನ್ನು ಕರುನಾಡ ಕಂದರೇ ನಿಮಗೆ

ಅದಕಿಂತು ಪೂಗಂಪು ಅದಕಿಂತು ಮನಕಿಂಪು
ಅದಕಿಂತು ಓಡಾಟ ಮುದ್ದು ಮಗನೆ

# ರೋ ಬಿ ಬಾ ಬು

ಇದು ಯಾರಕಥೆ ಮುದ ಕೇಳಲಿದು
ರೊಬಿ ಬಾಬನದು ರೊಬಿ ಬಾಬನದು

ರೋಬಿ ಬಾಬು ಎಂಬುವ ಆಬ ಬಾಬ ಎಂಥವ
ರೋಬಿ ಬಾಬು ಚಿಕ್ಕವ ಆಬ ಬಾಬ ತುಂಟನು

ಗುಂಡಗೊಂದು ಗೀರೊಳು ಪುಂಡನನ್ನು ಕೂಡಿಸೆ
ಗುಂಡ ದಾಟಲಂಜುವ ಪುಂಡ ರೋಬಿ ಬಾಬುವು

ಕಾಲ ಮೋಜ ಜೋಡಿಯ ಮೇಲೆ ಬೀಸಿ ನೋಡುವ
ಬಾಳ ಬುತ್ತಿ ಯೊಡ್ಡುತ ಮೇಲೆ ಮತ್ತೆ ಬೀಸುವ

ಚಿತ್ತ ಪುಸ್ತುಕಾದಿಯ ಹೊತ್ತುಬಂದುಸಾಧ್ಯರ
ನೆತ್ತ ಕಂಡರಾತಗೆ ಹತ್ತುಶೂಲ ನೆತ್ತಿಗೆ

ಬಾಲ ಶಾಲೆಗಡರದೆ ಕಾಲನಿಟ್ಟು ನೀರಲಿ
ಬಾಳ ನೆಂದ ಜೋಡಲಿ ಹಾಳು ರೋಗವುಂಬನು

ಮೀಶೆ ಬಾರದಿದ್ದರು ದೇಶದೇಶ ಸುತ್ತಿದ
ಆಶೆಯಿಂದಹಾಡನು ರಾಶಿಮಾಡಿವೋದಿದ

ಹಾಡ ಕೇಳಿ ಭಾರಿಯ ಗೂಡ ಕಟ್ಟ ದೇಶವು
ನೋಡಿ ಗೀತಕಾರಗೆ ಜೋಡಿ ಇಲ್ಲವೆಂದರು

ವೀರಭೂಮಿ ಎಂಬಲಿ ಧೀರನಾತ ನಿಂದನು
ಭಾರಿಯೊಂದ ಕಟ್ಟಿಸಿ ಪೋರರೋದೆ ಶಾಲೆಯು

ಆಲ ಜಾಲ ರಂಜದ ಸಾಲ ಮಧ್ಯೆ ಪಾಠವ
ಬಾಲರೆಲ್ಲ ಕಲಿವರು ಬಾಲರೆಲ್ಲ ಮೇಲ್ಮೆಗೆ

ಚಿಳ್ಳೆ ಪಿಳ್ಳೆ ಸಂಗಡ ಗೊಳ್ಳಗೊಳ್ಳ ನಕ್ಕರೆ
ಬೆಳ್ಳಿದಾಡಿ ಮೋರೆಗೆ ಒಳ್ಳೆಕಾಂತಿಯಿಾವುದು

ಬಳ್ಳ ಬಳ್ಳ ಹಾಸ್ಯವ ಡೊಳ್ಳು ಇಂಗಲೆಬ್ಬಿಸಿ
ಬಳ್ಳಬಳ್ಳ ಕೀರ್ತಿಯು ಕೊಳ್ಳೆಯಿಟ್ಟ ನಾತನು

ವೀರಭೂಮಿಯಲ್ಲಿಗೆ ಬಾರೋ ಅಲ್ಲಿ ಶಾಲೆಗೆ
ಯಾರು ಕಾಣದಂತೆಯೆ ಬಾರೊ ನಾವು ಪೋಗುವ

ಕಂಡು ರೋಬಿ ಬಾಬನ ಉಂಡು ತಿಂದು ಆಡುವ
ಕಂಡ ಕೊಂಬೆ ಏರುತ ಧಂಡಿ ಪಾಠ ಓದುವ

ಇದು ಯಾರ ಕಥೆ ರೊಬಿ ಬಾಬನದು
ಮುದ ಕೇಳಲಿದು ರೊಬಿ ಬಾಬನದು

# ಕರೆ

ಕೊರಗಿಡವಲೆಗಳು ತಲೆಗಳ ಬಡಿದು
ಕರಿಘಟ್ಟ ಸಾಲಲ್ಲಿ ತೋರೆಂದು ನಿನ್ನ
ಕರೆದವು ಸುರಹೊನ್ನೆ ನಾಗಸಂಪಿಗೆಯು
ಅರಿಯನೆ ಬಾರನೆ ಕಿರಿಯನೆಂದೆನುತ

ಕಾದು ಅಜಂತ ದ್ವಾರಸಮುದ್ರ
ಹಾದಿಯು ನೋಳ್ಪವು ಬಾರನೆಂದೆನುತ
ಕಾದಿವೆ ಭಂಡಾರ ಹಿರಿಯರವು
ಮೋದ ಪುಣ್ಯೋದಯ ನೀ ಪುಟ್ಟಿದಂದು

ಎದ್ದು ಶರಾವತಿ ಆ ಗಿರಿ ಕನ್ಯೆ
ಬಿದ್ದು ಸಹ್ಯಾದ್ರಿಯ ಮಡಿಲೊಳಗಿಂದ
ಬಿದ್ದು ಕಂದರದಲ್ಲಿ ಗೊಂದಲವಿಟ್ಟು
ಮುದ್ದನ ಕಳುಹೆಂದು ಕೂಗಿ ಕೂಗುವಳು

ತೊಟ್ಟಿಲ ಬಿಟ್ಟಂದೆ ಬೇರೆ ಬೇರಾಗಿ
ಒಟ್ಟಿಗೆ ಕೂಡಿ ಕೃಷ್ಣಯ್ಯನ ಕೂಡಿ
ನೆಟ್ಟನೆ ಕಳುಹು ಕರ್ಣಾಟಕ ಪುತ್ಥಳಿ
ಪುಟ್ಟ ಕಂದಯ್ಯನ ಕಳುಹೆಂಬರು

ಅಗೆಯಿಸಿ ಬಂಗಾರ ಬೆಳಗಿಸಿ ಮೈಸೂರ
ಸೊಗಸಿ ನಿನ್ನಕ್ಕನು ಕಾವೇರೀ
ಹಗರಣ ಮಾಳ್ಪಳು ಶಿವನ ಸಮುದ್ರದಿ
ತೆಗೆ ತೆಗೆ ಚಿಣ್ಣನ ಕಳುಹಲಿಲ್ಲೆಂದು

ಚಿಣ್ಣ ನಿನ್ನೊಡನಾಡ ಬಯಸುವರು
ಅಣ್ಣ ಅಕ್ಕಂದಿರು ಬಹು ಜನರಿಹರು
ಕಣ್ಣಿನ ಗೊಂಬೆಯು ಬಹನೆಂದು ಬಹನೊ
ಚಿಣ್ಣನ ಕಾಂಬೆನೆ ಕಾಂಬೆ ನೆಂದಿಹರು

# ದೂರ

ಅಮ್ಮನ ಶೆರಗ ಬಿಡೆ ದುಮ್ಮಾನ ಸುತ್ತುವುದು
ಅಮ್ಮನ ನಗುವೊಗ ದಾಮಿ ಚಕ್ಕುಲಿ ದಾಚಿ
ಸುಮ್ಮನೆ ವ್ಯರ್ಥವು ಹೊಸಿಲೊಳಗಿರದೆ

ಮರದ ಪೂಥಳಿಯಾಗು ಇರಿಸುವೆ ಕಿಸೆಯೊಳಗೆ
ಗುರುಗಳ ಬಳಿಯೊಳು ಕಲಿಯುತಲಮರವ
ಮರೆಯದಲಡಿಗಡಿಗೆತ್ತಿ ಮುತ್ತಿಡುವೆ

ಶಾಲೆಗೆ ಪೋಗದೆಲೆ ಮೂಲೆಯೊಳಡಗುವೆನು
ಸೋಲಿಸಿ ಹೀರುವೆ ದೂರ ಪೂತಣಿ ಬರೆ
ಬಾಲನೆಂದೆನ್ನುತಲಂಜಬೇಡಮ್ಮ

ದೂರವ ಹಿಡಿತರುವೆ ದೂರವ ಸೆರೆ ಹಿಡಿವೆ
ದಾರಿಯಲೆಣಿಸುತ ಕೆರೆ ತೊರೆ ಗಿರಿಗಳ
ಮೀರದೆ ಬರ್ಪನೆ ಮಾಡೆ ಮಾಮೀಜೋತಿ

ದೂರವ ನರಸಿ ಪೋಪೆ ದಾರಿಯನಳೆಯುತಲಿ
ದೂರ ದೂರೆಂಬುವ ರಕ್ಕಸಿ ಹಾರುವ
ಊರೊಳಗಿರುವಳೆ? ಸಾಗರದಾಚೆ

ನಡುವಿಲ್ಲಿ ಬಿಗಿಯಮ್ಮ ಕೊಡು ಕೊಡು ಬುತ್ತಿಯನು
ಕೆಡವಿ ಕಾದಾಡುವೆ ಕೊಲುವೆನೆ ದೂರನ
ಬಿಡಲಾರೆ ಎನಬೇಡ ಕಣ್ಣೀರ ಕರೆದು

ದೂರಸಾರೆಂಬುದು ಯಾರ್ಯಾರ ನೋಯಿಸಿ
ದಾರಿಯ ತಪ್ಪಿಸಿ ಮರುಳು ಮಾಡಿಹುದು
ದೂರವ ಹಿಡಿ ತರುವೆ ದಾರಿಯ ಬಿಡಿ ಬಿಡಿರಿ

ಕರುನಾಡ ಬೊಂಬೆಗೆ

ಪುಟ್ಟ ಕಂದಯ್ಯಗೆ

ಹಿರಿಯಣ್ಣ ಹೊಯ್ಸಳ

ಕಳುಹಿಸಿದನು